ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 28 ನೇ ಸೆಪ್ಟೆಂಬರ್, 2020

ಕೋಲಾರ ಜಿಲ್ಲೆಯ ಅರಣ್ಯ ಪ್ರದೇಶದ ವಿಸ್ತೀರ್ಣದ ಬಗ್ಗೆ

ಶ್ರೀ ಗೋವಿಂದ ರಾಜು (ವಿಧಾನಸಭೆಯಿಂದ ಚುನಾಯಿತರಾದವರು ):-

886 (859) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕೋಲಾರ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಒಟ್ಟು ಅರಣ್ಯದ ವಿಸ್ತೀರ್ಣವೆಷ್ಟು; (ಸಾಮಾಜಿಕ ಮತ್ತು ಡೀಮ್ಡ್ ಅರಣ್ಯ ವಿಸ್ತೀರ್ಣವಾರು ಹಾಗೂ ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು)

(ಆ) ಈ ಅರಣ್ಯದ ವ್ಯಾಪ್ತಿಯಲ್ಲಿ ಎಷ್ಟು ಹೆಕ್ಟೇರ್ ಪ್ರದೇಶದಲ್ಲಿ ನೀಲಗಿರಿ ಮರಗಳನ್ನು ಬೆಳೆಯಲಾಗಿದೆ; (ಸಾಮಾಜಿಕ ಮತ್ತು ಡೀಮ್ಡ್ ಅರಣ್ಯ ವಿಸ್ತೀರ್ಣವಾರು ಹಾಗೂ ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು)

(ಇ) ನೀಲಗಿರಿ ಮರಗಳನ್ನು ಬೆಳಸಬಾರದೆಂದು ಸರ್ಕಾರ ಆದೇಶ ಹೊರಡಿಸಿರುವುದು ನಿಜವೇ; ಹಾಗಿದ್ದಲ್ಲಿ, ಆದೇಶದ ಪ್ರತಿಯನ್ನು ಒದಗಿಸುವುದು;

(ಈ) ಕೋಲಾರ ಜಿಲ್ಲೆಯ ವ್ಯಾಪ್ತಿಯಲ್ಲಿ ಎಷ್ಟು ಹೆಕ್ಟೇರ್ ಪ್ರದೇಶದಲ್ಲಿ ನೀಲಗಿರಿ ಮರಗಳನ್ನು ತೆರವುಗೊಳಿಸಲಾಗಿದೆ; (ಸಮಾಜಿಕ ಮತ್ತು ಡೀಮ್ಡ್ ಅರಣ್ಯ ವಿಸ್ತೀರ್ಣವಾರು ಹಾಗೂ ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು)

(ಉ) ಬಾಕಿ ಉಳಿದಿರುವ ಮರಗಳನ್ನು ಇದುವರೆಗೂ ತೆರವುಗೊಳಸದಿರಲು ಕಾರಣಗಳೇನು;

(ಊ) ಕೋಲಾರ ಜಿಲ್ಲೆಯಲ್ಲಿರುವ ಸರ್ಕಾರಿ ಮತ್ತು ಖಾಸಗಿ ನರ್ಸರಿಗಳ ಸಂಖ್ಯೆ ಎಷ್ಟು; (ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು)

(ಋ) ಈ ನರ್ಸರಿಗಳಲ್ಲಿ ಯಾವ ಯಾವ ಜಾತಿಯ ಗಿಡಗಳನ್ನು ವಾರ್ಷಿಕವಾಗಿ ಎಷ್ಟು ಪ್ರಮಾಣದಲ್ಲಿ ಬೆಳೆಯಲಾಗುತ್ತಿದೆ; (ವಿವರಗಳನ್ನು ನೀಡುವುದು)

(ಎ) ಈ ನರ್ಸರಿಗಳಿಂದ ಗಿಡಗಳನ್ನು ವಿತರಿಸುವಾಗ ಸರ್ಕಾರ ಅನುಸರಿಸುತ್ತಿರುವ ಮಾನದಂಡಗಳೇನು?